# ಕರ್ನಾಟಕ ವಿಧಾನಸಭೆ

ಹದಿಮೂರನೇ ವಿಧಾನಸಭೆ

(ಹದಿನಾಲ್ಕನೇ ಅಧಿವೇಶನ)

## ಕಾರ್ಯಕಲಾಪಗಳ ಪಟ್ಟಿ

ಗುರುವಾರ, ದಿನಾಂಕ 02ನೇ ಆಗಸ್ಟ್, 2012

(ಸಮಯ: ಬೆಳಿಗ್ಗೆ 11.00 ಗಂಟೆಗೆ)

----

### 1. ನಿಯಮ 69ರ ಮೇರೆಗೆ ಸಾರ್ವಜನಿಕ ಮಹತ್ವದ ಜರೂರು ವಿಷಯದ ಬಗ್ಗೆ ಅಲ್ಪ ಕಾಲಾವಧಿ ಚರ್ಚೆ

1. ಶ್ರೀಯುತರುಗಳಾದ ಎಂ.ಬಿ.ಪಾಟೀಲ್, ಅಪ್ಪಾಸಾಹೇಬ ಮಲ್ಲಪ್ಪ ಪಟ್ಟಣಶೆಟ್ಟಿ ಹಾಗೂ ಇತರರು ಡೋಣಿ ನದಿ ಪ್ರವಾಹ ನಿಯಂತ್ರಣ ಮತ್ತು ಹೂಳು ತುಂಬುವಿಕೆಗೆ ಸಮಗ್ರ ಪರಿಹಾರದ ವಿಚಾರದಲ್ಲಿ ನೀಡಿರುವ ಸೂಚನೆಯ ಬಗ್ಗೆ ಮುಂದುವರೆದ ಚರ್ಚೆ.

2. ಶ್ರೀಯುತರುಗಳಾದ ಹೆಚ್.ಡಿ.ರೇವಣ್ಣ, ಬಂಡೆಪ್ಪ ಖಾಶೆಂಪೂರ, ವೆಂಕಟರಾವ್ ನಾಡಗೌಡ, ಕೆ.ಎಂ.ಶಿವಲಿಂಗೇಗೌಡ ಹಾಗೂ ಇತರರು ರಾಜ್ಯದಲ್ಲಿರುವ ಸಹಕಾರ ಸಂಘಗಳಲ್ಲಿ ಹಣ ದುರುಪಯೋಗ ಹಾಗೂ ಫಲಾನುಭವಿಗಳಿಗೆ ಸಿಗಬೇಕಾದ ಸೌಲಭ್ಯಗಳನ್ನು ಒಬ್ಬನೇ ಉಪಯೋಗಿಸುತ್ತಿದ್ದಾರೆಂದು ದಿನಾಂಕ: 17.07.2012ರಂದು ಮಾನ್ಯ ಸಹಕಾರ ಸಚಿವರ ಪತ್ರಿಕಾ ಹೇಳಿಕೆಯ ಕುರಿತು ಚರ್ಚೆ.

3. ಶ್ರೀಯುತರುಗಳಾದ ಹೆಚ್.ಡಿ.ರೇವಣ್ಣ, ಬಂಡೆಪ್ಪ ಖಾಶೆಂಪೂರ, ವೆಂಕಟರಾವ್ ನಾಡಗೌಡ ಹಾಗೂ ಇತರರು ರಾಜ್ಯದಲ್ಲಿ ಗ್ರಾಮಾಂತರ ಪ್ರದೇಶಗಳಿಗೆ ನಿರಂತರ ವಿದ್ಯುತ್ ಸರಬರಾಜು ಮಾಡುವ ಉದ್ದೇಶದಿಂದ 175 ತಾಲ್ಲೂಕುಗಳಲ್ಲಿ 5 ವಿದ್ಯುತ್ ಸರಬರಾಜು ಕಂಪನಿಗಳ ನಿರಂತರ ಜ್ಯೋತಿ ಕಾಮಗಾರಿಯು 2 ವರ್ಷಗಳಲ್ಲಿ ಗುಜರಾತ್ ಮಾದರಿಯಲ್ಲಿ ಪೂರ್ಣಗೊಳಿಸುವ ವಿಚಾರ ಕುರಿತು ಚರ್ಚೆ.

4. ಶ್ರೀಯುತರುಗಳಾದ ಸಿದ್ದರಾಮಯ್ಯ, ವಿ.ಶ್ರೀನಿವಾಸ ಪ್ರಸಾದ್, ಡಾ|| ಹೆಚ್.ಸಿ. ಮಹದೇವಪ್ಪ ಹಾಗೂ ಇತರರು ಕೇಂದ್ರ ಸರ್ಕಾರವು 2012-13ನೇ ಸಾಲಿನಿಂದ ಜಾರಿಗೆ ತಂದಿರುವ RTE ಕಾಯ್ದೆಯನ್ನು ಜಾರಿಗೊಳಿಸುವಲ್ಲಿ ಸಂಪೂರ್ಣವಾಗಿ ವಿಫಲಗೊಂಡಿರುವ ವಿಚಾರ ಕುರಿತು ಚರ್ಚೆ.

5. ಶ್ರೀ ಎಂ.ಬಿ. ಪಾಟೀಲ್ ಅವರು ಕೃಷ್ಣಾ ನ್ಯಾಯಮಂಡಳಿಯ ದಿನಾಂಕ:30.12.2010ರಂದು ತೀರ್ಪು-2(ಬ್ರಿಜೇಶ್ ಕುಮಾರ್) ನೀಡಿದ್ದು, ಇಲ್ಲಿಯವರೆಗೆ ಸರ್ಕಾರ ಸಕಾರಾತ್ಮಕ (Effective steps ) ಹೆಜ್ಜೆಗಳನ್ನು ಇಟ್ಟಿರುವುದು ಮತ್ತು 2012-13ಕ್ಕೆ ಕೃಷ್ಣಾ ಮೇಲ್ದಂಡೆ ಯೋಜನೆ ಸ್ಟೇಜ್ 3ನೇ ಹಂತದ ಯೋಜನೆಗಳ ವಿಚಾರ ಕುರಿತು ಚರ್ಚೆ.

6. ಶ್ರೀಯುತರುಗಳಾದ ನೆ.ಲ. ನರೇಂದ್ರಬಾಬು, ರಾಮಲಿಂಗಾರೆಡ್ಡಿ, ಕೃಷ್ಣ ಬೈರೇಗೌಡ, ದಿನೇಶ್ ಗುಂಡೂರಾವ್ ಹಾಗೂ ಇತರರು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯ ಅನುದಾನಗಳು ಲಭ್ಯವಾಗದೆ ಶಾಸಕರುಗಳು ಅಸಹಾಯಕರಾಗಿರುವ ವಿಚಾರ ಕುರಿತು ಚರ್ಚೆ.

ಮು.ತಿ.ನೋ.,

## 2. ಪ್ರಶ್ನೋತ್ತರ

ಅ) ಸದನದಲ್ಲಿ ಉತ್ತರಿಸುವ ಪ್ರಶ್ನೆಗಳು : ಎಂಟನೇ ಪಟ್ಟಿ

ಆ) ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆಗಳು : ಎಂಟನೇ ಪಟ್ಟಿ

## 3.ಶಾಸನ ರಚನೆ

### I ವಿಧೇಯಕಗಳನ್ನು ಮಂಡಿಸುವುದು

**1) ಕರ್ನಾಟಕ ನರ್ಸಿಂಗ್ ಮತ್ತು ಅರೆವೈದ್ಯಕೀಯ ವಿಜ್ಞಾನಗಳ ಶಿಕ್ಷಣ (ನಿಯಂತ್ರಣ) ಪ್ರಾಧಿಕಾರ ವಿಧೇಯಕ, 2012**
**ಶ್ರೀ ಎಸ್.ಎ. ರಾಮದಾಸ್ ( ವೈದ್ಯಕೀಯ ಶಿಕ್ಷಣ ಸಚಿವರು) ಅವರು:-**

ಅ) 2012ನೇ ಸಾಲಿನ ಕರ್ನಾಟಕ ನರ್ಸಿಂಗ್ ಮತ್ತು ಅರೆವೈದ್ಯಕೀಯ ವಿಜ್ಞಾನಗಳ ಶಿಕ್ಷಣ (ನಿಯಂತ್ರಣ) ಪ್ರಾಧಿಕಾರ ವಿಧೇಯಕವನ್ನು ಮಂಡಿಸಲು ಅನುಮತಿ ಕೋರುವುದು;
ಆ) ಹಾಗೂ ವಿಧೇಯಕವನ್ನು ಮಂಡಿಸುವುದು.

**2) ಕರ್ನಾಟಕ ವಿಧಾನಮಂಡಲದವರ ವೇತನ, ನಿವೃತ್ತಿ ವೇತನ ಮತ್ತು ಭತ್ಯೆಗಳ (ಎರಡನೇ ತಿದ್ದುಪಡಿ) ವಿಧೇಯಕ, 2012**
**ಶ್ರೀ ಸುರೇಶ್ ಕುಮಾರ್ (ನಗರಾಭಿವೃದ್ಧಿ, ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರು) ಅವರು:-**
ಅ) 2012ನೇ ಸಾಲಿನ ಕರ್ನಾಟಕ ವಿಧಾನಮಂಡಲದವರ ವೇತನ,ನಿವೃತ್ತಿ ವೇತನ ಮತ್ತು ಭತ್ಯೆಗಳ(ಎರಡನೇ ತಿದ್ದುಪಡಿ) ವಿಧೇಯಕವನ್ನು ಮಂಡಿಸಲು ಅನುಮತಿ ಕೋರುವುದು;
ಆ) ಹಾಗೂ ವಿಧೇಯಕವನ್ನು ಮಂಡಿಸುವುದು.

### II. ವಿಧೇಯಕವನ್ನು ಪರ್ಯಾಲೋಚಿಸುವುದು ಹಾಗೂ ಅಂಗೀಕರಿಸುವುದು

**1) ಕರ್ನಾಟಕ ನರ್ಸಿಂಗ್ ಮತ್ತು ಅರೆವೈದ್ಯಕೀಯ ವಿಜ್ಞಾನಗಳ ಶಿಕ್ಷಣ (ನಿಯಂತ್ರಣ)ಪ್ರಾಧಿಕಾರ ವಿಧೇಯಕ, 2012**

**ಶ್ರೀ ಎಸ್.ಎ. ರಾಮದಾಸ್ ( ವೈದ್ಯಕೀಯ ಶಿಕ್ಷಣ ಸಚಿವರು) ಅವರು:-**

ಅ) 2012ನೇ ಸಾಲಿನ ಕರ್ನಾಟಕ ನರ್ಸಿಂಗ್ ಮತ್ತು ಅರೆವೈದ್ಯಕೀಯ ವಿಜ್ಞಾನಗಳ ಶಿಕ್ಷಣ (ನಿಯಂತ್ರಣ) ಪ್ರಾಧಿಕಾರ ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;
ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

ಮು.ತಿ.ನೋ.,

**2) ಕರ್ನಾಟಕ ವಿಧಾನಮಂಡಲದವರ ವೇತನಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ (ಎರಡನೇ ತಿದ್ದುಪಡಿ) ವಿಧೇಯಕ, 2012**

**ಶ್ರೀ ಸುರೇಶ್ ಕುಮಾರ್ (ನಗರಾಭಿವೃದ್ಧಿ, ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರು) ಅವರು:-**

ಅ) 2012ನೇ ಸಾಲಿನ ಕರ್ನಾಟಕ ವಿಧಾನಮಂಡಲದವರ ವೇತನಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ (ಎರಡನೇ ತಿದ್ದುಪಡಿ) ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

## 4. ಗಮನ ಸೆಳೆಯುವ ಸೂಚನೆಗಳು

1. ಶ್ರೀ ಕಾಕಾಸಾಹೇಬ್ ಪಾಂಡುರಂಗ ಪಾಟೀಲ್ ಅವರು ಬೆಳಗಾಂ ಜಿಲ್ಲೆಯಲ್ಲಿ ಮರಾಠ ಮತ್ತು ಚತುರ್ಥ ಲಿಂಗಾಯಿತ ಸಮುದಾಯವನ್ನು ಈಗಿರುವ ವರ್ಗ 3ಬಿ ಯಿಂದ 2 ಎ ವರ್ಗಕ್ಕೆ ಸೇರ್ಪಡೆ ಮಾಡುವ ಬಗ್ಗೆ ಸಮಾಜ ಕಲ್ಯಾಣ ಮತ್ತು ಬಂದಿಖಾನೆ ಸಚಿವರ ಗಮನ ಸೆಳೆಯುವುದು.

2. ಶ್ರೀಯುತರಾದ ಸಿದ್ದರಾಮಯ್ಯ, ಹೆಚ್.ಡಿ.ರೇವಣ್ಣ, ಟಿ.ಬಿ. ಜಯಚಂದ್ರ ಹಾಗೂ ಇತರರು ಭಾರತ ಸಂವಿಧಾನಕ್ಕೆ 97ನೇ ತಿದ್ದುಪಡಿಯನ್ನು ದಿನಾಂಕ: 15.02.2012ರಿಂದ ಜಾರಿಗೊಳಿಸಲಾಗಿದ್ದು ಸದರಿ ತಿದ್ದುಪಡಿಗಳನ್ವಯ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮಕ್ಕೆ ತಿದ್ದುಪಡಿ ತರುವಲ್ಲಿ ಆಗಿರುವ ವಿಳಂಬದ ಬಗ್ಗೆ ಸಹಕಾರ ಸಚಿವರ ಗಮನ ಸೆಳೆಯುವುದು.

3. ಶ್ರೀ ಕೆ.ಎಂ.ಶಿವಲಿಂಗೇಗೌಡ ಅವರು ಬಹುತೇಕ ಹಳ್ಳಿಗಳಲ್ಲಿ ಕುಡಿಯುವ ನೀರಿನ ಯೋಜನೆಗಳು ವಿಳಂಬವಾಗುತ್ತಿರುವ ಬಗ್ಗೆ ಉಪ ಮುಖ್ಯಮಂತ್ರಿ (ಕಂದಾಯ ಮತ್ತು ಗ್ರಾಮೀಣಾಭಿವೃದ್ಧಿ ಸಚಿವರ) ಯವರ ಗಮನ ಸೆಳೆಯುವುದು.

4. ಶ್ರೀಯುತರಾದ ಹೆಚ್.ಡಿ. ರೇವಣ್ಣ, ಬಂಡೆಪ್ಪ ಕಾಶಂಪುರ, ಹಾಗೂ ಇತರರು ಬೆಂಗಳೂರು ಹಾಗೂ ಹೊರವಲಯದಲ್ಲಿ ಕೊಲೆ ಸುಲಿಗೆಗಳು ಅವ್ಯಾಹತವಾಗಿ ಹೆಚ್ಚಾಗಿದ್ದು, ಇದಕ್ಕೆ ಪೊಲೀಸ್ ಅಧಿಕಾರಿಗಳು ಪರೋಕ್ಷವಾಗಿ ಕಾರಣವಾಗಿರುವ ಬಗ್ಗೆ ಉಪ ಮುಖ್ಯಮಂತ್ರಿ (ಗೃಹ ಮತ್ತು ಸಾರಿಗೆ ಸಚಿವರ) ಯವರ ಗಮನ ಸೆಳೆಯುವುದು.

5. ಶ್ರೀ ವೀರಭದ್ರಪ್ಪ ಹಾಲಹರವಿ ಹುಬ್ಬಳ್ಳಿ ಗಬ್ಬೂರು ಬೈಪಾಸ್‌ನಿಂದ ವರ್ತುಲದ ಚತುಷ್ಪಥ ರಸ್ತೆ ನಿರ್ಮಾಣದ ಬಗ್ಗೆ ಲೋಕೋಪಯೋಗಿ ಸಚಿವರ ಗಮನ ಸೆಳೆಯುವುದು.

6.. ಡಾ|| ಶರಣ ಪ್ರಕಾಶ್ ರುದ್ರಪ್ಪ ಪಾಟೀಲ್ ಅವರು ಚಿಂಚೋಳಿ ತಾಲ್ಲೂಕು ರಾಯಕೋಡ ಗ್ರಾಮದ ಹಿಂದುಳಿದ ವರ್ಗದ ವಸತಿ ನಿಲಯ ಕಟ್ಟಡ ನಿರ್ಮಾಣಕ್ಕೆ ಹಣ ಬಿಡುಗಡೆ ಮಾಡುವ ಬಗ್ಗೆ ಸಮಾಜ ಕಲ್ಯಾಣ ಮತ್ತು ಬಂದೀಖಾನೆ ಸಚಿವರ ಗಮನ ಸೆಳೆಯುವುದು.

ಪು.ತಿ.ನೋ.,

7.. ಶ್ರೀಯುತರಾದ ಅಮರೇಶ, ಡಿ.ಎಂ.ಐಹೊಳೆ ಮತ್ತು ವೀರಭದ್ರಪ್ಪ ಹಾಲಹರವಿ ಅವರು ನ್ಯಾಯಮೂರ್ತಿ ಎ.ಜೆ. ಸದಾಶಿವ ಆಯೋಗದ ಪರಿಶಿಷ್ಟ ಜಾತಿ ಸಮೀಕ್ಷೆ ವರದಿಯನ್ನು ರಾಜ್ಯ ಸರ್ಕಾರಕ್ಕೆ ಒಪ್ಪಿಸಿದ ಬಗ್ಗೆ ಮತ್ತು ಸದರಿ ವರದಿಯನ್ನು ಕೇಂದ್ರ ಸರ್ಕಾರಕ್ಕೆ ಶಿಫಾರಸ್ಸು ಮಾಡುವ ಬಗ್ಗೆ ಸಮಾಜ ಕಲ್ಯಾಣ ಸಚಿವರ ಗಮನ ಸೆಳೆಯುವುದು.

8. ಶ್ರೀ ಹೆಚ್.ಡಿ. ರೇವಣ್ಣ ಅವರು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಲ್ಲಿನ ಹುದ್ದೆಗಳನ್ನು ಭರ್ತಿ ಮಾಡದಿರುವುದರಿಂದ ಇಲಾಖೆಯಲ್ಲಿರುವ ಯೋಜನೆಗಳನ್ನು ಅನುಷ್ಠಾನಕ್ಕೆ ತರಲು ನಿಷ್ಕ್ರಿಯಗೊಂಡಿರುವ ಬಗ್ಗೆ ಸಮಾಜ ಕಲ್ಯಾಣ ಸಚಿವರ ಗಮನ ಸೆಳೆಯುವುದು.

9. ಶ್ರೀ ರಘುಪತಿ ಭಟ್ ಕೆ. ಅವರು ಉಡುಪಿ ಹಾಗೂ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ವಾಸಿಸುತ್ತಿರುವ ಕುಡುಬಿ ಜನಾಂಗದವರನ್ನು ಪರಿಶಿಷ್ಟ ಜಾತಿಗೆ ಸೇರಿಸುವ ಕುರಿತು ಕೇಂದ್ರ ಸರ್ಕಾರಕ್ಕೆ ಶಿಫಾರಸ್ಸು ಕಳುಹಿಸುವ ಬಗ್ಗೆ ಸಮಾಜ ಕಲ್ಯಾಣ ಸಚಿವರ ಗಮನ ಸೆಳೆಯುವುದು.

10. ಶ್ರೀ ಬಾಬಣ್ಣ ಪ್ರಕಾಶ ಹುಕ್ಕೇರಿ ಅವರು ಚಿಕ್ಕೋಡಿಯ ತಹಶೀಲ್ದಾರರು ಬೋಟ್‌ಗಳ ಮಾಲೀಕರಿಗೆ ತೊಂದರೆ ನೀಡುತ್ತಿರುವ ಬಗ್ಗೆ ಉಪ ಮುಖ್ಯಮಂತ್ರಿ (ಕಂದಾಯ ಮತ್ತು ಗ್ರಾಮೀಣಾಭಿವೃದ್ಧಿ ಸಚಿವರ) ಯವರ ಗಮನ ಸೆಳೆಯುವುದು.

11. ಶ್ರೀ ನಾಡಗೌಡ ವೆಂಕಟರಾವ್ ಅವರು ರಾಯಚೂರು ಒಪೆಕ್ ಆಸ್ಪತ್ರೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ನೌಕರರನ್ನು ಕೆಲಸದಿಂದ ವಜಾ ಮಾಡಿರುವ ಬಗ್ಗೆ ವೈದ್ಯಕೀಯ ಶಿಕ್ಷಣ ಸಚಿವರ ಗಮನ ಸೆಳೆಯುವುದು.

12. ಶ್ರೀ ಲಕ್ಷ್ಮೀನಾರಾಯಣ ಕೆ ಅವರು ಕೋಟೆಗಾರ್ ಮೇಟ್ರಿ ಮತ್ತು ರಾಮಕ್ಷತ್ರಿಯ ಇತ್ಯಾದಿ ಪರ್ಯಾಯ ಜಾತಿಯನ್ನು ಪರಿಶಿಷ್ಟ ಜಾತಿಗೆ ಸೇರಿಸಲು ಸರ್ಕಾರ ಕೈಗೊಂಡಿರುವ ಕ್ರಮದ ಬಗ್ಗೆ ಸಮಾಜ ಕಲ್ಯಾಣ ಮತ್ತು ಬಂದಿಖಾನೆ ಸಚಿವರ ಗಮನ ಸೆಳೆಯುವುದು.

13. ಶ್ರೀ ಹೆಚ್.ಡಿ. ರೇವಣ್ಣ ಅವರು ಹಾಸನ ಜಿಲ್ಲೆಯ ಜಿಲ್ಲಾಧಿಕಾರಿಗಳ ಉಪ ವಿಭಾಗಾಧಿಕಾರಿಗಳ ಹಾಗೂ ತಾಲ್ಲೂಕು ಕಛೇರಿಗಳಲ್ಲಿರುವ ವಿವಿಧ ದರ್ಜೆ ಹುದ್ದೆಗಳಲ್ಲಿರುವ ನೌಕರರುಗಳಿಗೆ ಮುಂಬಡ್ತಿ ನೀಡದಿರುವ ಬಗ್ಗೆ ಉಪ ಮುಖ್ಯಮಂತ್ರಿ (ಕಂದಾಯ ಮತ್ತು ಗ್ರಾಮೀಣಾಭಿವೃದ್ಧಿ ಸಚಿವರ) ಯವರ ಗಮನ ಸೆಳೆಯುವುದು.

14. ಶ್ರೀ ಗೂಳಿಹಟ್ಟಿ ಡಿ ಶೇಖರ್ ಅವರು ಅಪ್ಪರ್ ಭದ್ರ ಲಿಫ್ಟ್ ಇರಿಗೇಷನ್ ಪ್ಯಾಕೇಜ್-2 ರ ಕಾಮಗಾರಿ ಟೆಂಡರ್‌ನಲ್ಲಿ ಕರ್ನಾಟಕ ಪಾರದರ್ಶಕ ನಿಯಮಗಳನ್ನು ಉಲ್ಲಂಘಿಸಿರುವ ಬಗ್ಗೆ ಭಾರೀ ಮತ್ತು ಮಧ್ಯಮ ನೀರಾವರಿ ಸಚಿವರ ಗಮನ ಸೆಳೆಯುವುದು.

15. ಶ್ರೀ ನೆ.ಲ. ನರೇಂದ್ರ ಬಾಬು ಅವರು ಬೆಂಗಳೂರಿನ ವಿಧಾನ ಸಭಾ ಕ್ಷೇತ್ರಗಳ ಖಾಸಗಿ ಶಾಲೆಗಳಲ್ಲಿ ಶಿಕ್ಷಣದ ಹಕ್ಕು ಕಾಯ್ದೆಯಡಿಯಲ್ಲಿ ದಾಖಲಾದ ವಿದ್ಯಾರ್ಥಿಗಳ ಅಪೂರ್ಣ ಮಾಹಿತಿ ನೀಡಿರುವವರ ವಿರುದ್ಧ ಕ್ರಮ ಕೈಗೊಳ್ಳುವ ಬಗ್ಗೆ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರ ಗಮನ ಸೆಳೆಯುವುದು.

ಪು.ತಿ.ನೋ.,

16. ಶ್ರೀ ಅಶೋಕ್ ಮಹದೇವಪ್ಪ ಪಟ್ಟಣ ಅವರು ಸರ್ಕಾರ ವಿವಿಧ ಇಲಾಖೆಗಳಲ್ಲಿ ಸರ್ಕಾರದ ಕಾರ್ಯಕ್ರಮದ ಅನುಷ್ಠಾನದ ಕುರಿತು ಹೊರಡಿಸಲಾಗುವ ಸರ್ಕಾರಿ ಆದೇಶಗಳ ಸುತ್ತೋಲೆಗಳು ಆಯಾ ಕ್ಷೇತ್ರದ ಶಾಸಕರುಗಳಿಗೆ ದೊರಕದೇ ಇರುವುದರಿಂದ ಅವುಗಳ ಪ್ರತಿಗಳನ್ನು ನೇರವಾಗಿ ಕಳುಹಿಸಿಕೊಡುವ ಬಗ್ಗೆ ಮುಖ್ಯಮಂತ್ರಿಗಳ ಗಮನ ಸೆಳೆಯುವುದು.

17. ಶ್ರೀ ಪ್ರಕಾಶ ಬಾಬಣ್ಣ ಹುಕ್ಕೇರಿ ಅವರು ಬೆಳಗಾವಿ ಜಿಲ್ಲೆ ಚಿಕ್ಕೋಡಿ ಪಟ್ಟಣ ಮತ್ತು ಕೇರೂರು ಗ್ರಾಮದಲ್ಲಿ ಸರ್ಕಾರಿ ಪದವಿ ಪೂರ್ವ ಕಾಲೇಜು ಕಟ್ಟಡ ಕಾಮಗಾರಿ ಪೂರ್ಣಗೊಳ್ಳದೆ ವಿದ್ಯಾರ್ಥಿಗಳ ಶೈಕ್ಷಣಿಕ ಪ್ರಗತಿ ಕುಂಠಿತವಾಗಿರುವ ಬಗ್ಗೆ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರ ಗಮನ ಸೆಳೆಯುವುದು.

18. ಶ್ರೀ ರಮನಾಥ್‌ರೈ. ಬಿ ಅವರು ಬಂಟ್ವಾಳ ತಾಲ್ಲೂಕು ಸಜೀಪಮುನ್ನೂರು ಗ್ರಾಮದಲ್ಲಿ ಪ್ರಾರಂಭವಾದಂತಹ ಏತ ನೀರಾವರಿ ಯೋಜನೆಯು ನೆನೆಗುದಿಗೆ ಬಿದ್ದಿರುವ ಬಗ್ಗೆ ಸಣ್ಣ ನೀರಾವರಿ, ಕನ್ನಡ ಮತ್ತು ಸಂಸ್ಕೃತಿ ಸಚಿವರ ಗಮನ ಸೆಳೆಯುವುದು.

19. ಶ್ರೀ ಗೂಳಿಹಟ್ಟಿ ಡಿ ಶೇಖರ್ ಅವರು ಸರ್ವೆ ನಂಬರ್ 59 ದೊಡ್ಡಬ್ಯಾಲದ ಕೆರೆ ಹೊಸದುರ್ಗ ತಾಲ್ಲೂಕು ಚಿತ್ರದುರ್ಗ ಜಿಲ್ಲೆ ಇಲ್ಲಿ ಬಡ ದಲಿತ ರೈತರ ಜಮೀನನ್ನು ವಶಪಡಿಸಿಕೊಂಡು ಗಣಿಗಾರಿಕೆಗೆ ಅವಕಾಶ ನೀಡಿರುವ ಬಗ್ಗೆ ಉಪ ಮುಖ್ಯಮಂತ್ರಿ (ಕಂದಾಯ ಮತ್ತು ಗ್ರಾಮೀಣಾಭಿವೃದ್ಧಿ ಸಚಿವರ) ಯವರ ಗಮನ ಸೆಳೆಯುವುದು.

20. ಶ್ರೀ ಕಿಮ್ಮನೆ ರತ್ನಾಕರ್ ಅವರು ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಬೆಂಗಳೂರು ನಗರ, ತುಮಕೂರು, ದಾವಣಗೆರೆ, ರಾಮನಗರ ಮತ್ತು ಬೆಂಗಳೂರು ಗ್ರಾಮಾಂತರ ಕಛೇರಿಗಳ ವ್ಯಾಪ್ತಿಯಲ್ಲಿನ ಶಾಲೆಗಳಲ್ಲಿ ನಿರ್ವಹಣಾ ಸಂಸ್ಥೆಯವರು, ಕ್ರಮವಾಗಿ ನಿರ್ವಹಿಸದಿದ್ದರೂ ಮಾಹೆಯಾನ ಹಣ ಪಾವತಿಗೆ ದೃಢೀಕರಣ ಕಳುಹಿಸುತ್ತಿರುವುದರಿಂದ ಅವರುಗಳ ಮೇಲೆ ಕೈಗೊಂಡ ಕ್ರಮದ ಬಗ್ಗೆ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರ ಗಮನ ಸೆಳೆಯುವುದು.

21. ಶ್ರೀ ರಮನಾಥ್‌ರೈ ಬಿ. ಅವರು ಬಂಟ್ವಾಳ ಮತ ಕ್ಷೇತ್ರದಲ್ಲಿ ಪ್ರಕೃತಿ ವಿಕೋಪಗಳಿಂದಾಗಿ ಮೃತಪಟ್ಟಿರುವ ಕುಟುಂಬದವರಿಗೆ ಪರಿಹಾರ ವಿತರಿಸುವ ಸಂದರ್ಭದಲ್ಲಿ ತಹಶೀಲ್ದಾರರು ಸ್ಥಳೀಯ ಶಾಸಕರನ್ನು ಕಡೆಗಣಿಸಿರುವ ಬಗ್ಗೆ ಮುಖ್ಯಮಂತ್ರಿಗಳ ಗಮನ ಸೆಳೆಯುವುದು.

22. ಶ್ರೀಯುತರಾದ ರಘುಪತಿ ಭಟ್ ಕೆ. ಹಾಗೂ ಲಾಲಾಜಿ ಮೆಂಡನ್ ಅವರು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಿಂದ ಹೊಸ ಆದೇಶ ಹೊರಡಿಸಿ ವಿದ್ಯಾರ್ಥಿ ವೇತನ ಮಂಜೂರಾತಿಗಾಗಿ ಕುಟುಂಬದ ವಾರ್ಷಿಕ ಆದಾಯ ಮಿತಿಯನ್ನು ಏರಿಸುವ ಆದೇಶ ಹೊರಡಿಸಿದ್ದು, ಇದರಿಂದ ಬಡ ವಿದ್ಯಾರ್ಥಿಗಳಿಗೆ ಬಹಳಷ್ಟು ತೊಂದರೆಯಾಗಿರುವುದರಿಂದ ಸದರಿ ಆದೇಶವನ್ನು ಹಿಂದಕ್ಕೆ ಪಡೆಯುವ ಬಗ್ಗೆ ಸಮಾಜ ಕಲ್ಯಾಣ ಮತ್ತು ಬಂದೀಖಾನೆ ಸಚಿವರ ಗಮನ ಸೆಳೆಯುವುದು.

ಪು.ತಿ.ನೋ.,

23.. ಶ್ರೀ ಕಿಮ್ಮನೆ ರತ್ನಾಕರ್ ಅವರು ಕರ್ನಾಟಕದಲ್ಲಿನ ಪ್ರಾಥಮಿಕ ಸಹಕಾರಿ ಸಂಘಗಳಲ್ಲಿ (ಕೃಷಿ ಪತ್ತಿನ ಸಹಕಾರ ಸಂಘ) ಕಾರ್ಯನಿರ್ವಹಿಸುತ್ತಿರುವ ನೌಕರರಿಗೆ ಸೇವಾ ಭದ್ರತೆ ನಿರ್ದಿಷ್ಟ ಸಂಬಳ ಸಾರಿಗೆಗಳು ನೀಡಲಾಗುತ್ತಿಲ್ಲವಾದ ಕಾರಣ ಅಭದ್ರತೆಯನ್ನು ಹೋಗಲಾಡಿಸಲು ಸರ್ಕಾರ ಕೈಗೊಂಡಿರುವ ಕ್ರಮದ ಬಗ್ಗೆ ಸಹಕಾರ ಸಚಿವರ ಗಮನ ಸೆಳೆಯುವುದು.

24. ಶ್ರೀ ಸಂಜಯ್ ಬಿ. ಪಾಟೀಲ್ ಅವರು ಬೆಳಗಾವಿ ಮಹಾನಗರ ಪಾಲಿಕೆಯವತಿಯಿಂದ ಪ್ರತಿ ದಿನ ಬೆಳಗಾವಿ ಗ್ರಾಮಾಂತರ ಮತಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ತುರಮರಿ ಗ್ರಾಮದಲ್ಲಿ ಶೇಖರಣೆಗೊಳ್ಳುತ್ತಿರುವ ಘನತ್ಯಾಜ್ಯವನ್ನು ನಿರ್ವಹಣೆ ಮಾಡುವ ಕುರಿತು ಮಾನ್ಯ ನಗರಾಭಿವೃದ್ಧಿ, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳು ಹಾಗೂ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಹಾಗೂ ಬೆಂಗಳೂರು ಜಲಮಂಡಳಿ ಸಚಿವರ ಗಮನ ಸೆಳೆಯುವುದು.

25. ಶ್ರೀ ಲಕ್ಷ್ಮಣ ಸಂಗಪ್ಪ ಸವದಿ ಅವರು ಅಥಣಿ ತಾಲ್ಲೂಕು ನಂದಗಾಂವ ಗ್ರಾಮದ ಕೃಷಿ ಪತ್ತಿನ ಸಹಕಾರ ಸಂಘದಲ್ಲಿ ಹಣದ ದುರುಪಯೋಗ ನಡೆದಿರುವ ಬಗ್ಗೆ ಸಂಬಂಧಿಸಿದವರ ವಿರುದ್ಧ ಜರುಗಿಸಿರುವ ಕಾನೂನು ಕ್ರಮದ ಬಗ್ಗೆ ಮಾನ್ಯ ಸಹಕಾರ ಸಚಿವರ ಗಮನ ಸೆಳೆಯವುದು.

26. ಶ್ರೀ ಹೆಚ್.ಡಿ.ರೇವಣ್ಣ ಅವರು ಕುಡಿಯುವ ನೀರಿನ ಉದ್ದೇಶಕ್ಕಾಗಿ ಮತ್ತು ಕೊಳವೆ ಬಾವಿಗಳಲ್ಲಿ ಅಂತರ್ಜಲವನ್ನು ಹೆಚ್ಚು ಮಾಡುವ ಉದ್ದೇಶದಿಂದ ಶ್ರೀ ಕೆ.ಸಿ. ರೆಡ್ಡಿ ವರದಿಯನ್ವಯ 1994ರಲ್ಲಿಯೇ ಸರ್ಕಾರ ಅನುಮೋದನೆ ನೀಡಿದ್ದು, ರಾಜ್ಯದಲ್ಲಿ ಏತನೀರಾವರಿ ಯೋಜನೆಗಳು ನೆನೆಗುದಿಗೆ ಬಿದ್ದಿರುವ ವಿಷಯದ ಬಗ್ಗೆ ಜಲಸಂಪನ್ಮೂಲ ಸಚಿವರ ಗಮನ ಸೆಳೆಯುವುದು.

27. ಶ್ರೀ ಹೆಚ್.ಕೆ. ಕುಮಾರಸ್ವಾಮಿ ಮತ್ತು ಕಿಮ್ಮನೆ ರತ್ನಾಕರ್ ಅವರು ಹಾಸನ ಜಿಲ್ಲೆಯ ಸಕಲೇಶಪುರ ತಾಲ್ಲೂಕಿನ ಕೆಲವು ಭಾಗಗಳು ಸೇರಿದಂತೆ ಕೊಡಗು, ಚಿಕ್ಕಮಗಳೂರು ಮತ್ತು ಶಿವಮೊಗ್ಗ ಜಿಲ್ಲೆಗಳಲ್ಲಿ ಏಲಕ್ಕಿ ಬೆಳೆಗೆ ಕೊಕ್ಕೆ ಕಂದು ಕಟ್ಟೆರೋಗ ತಗಲಿದ್ದು, ಬೆಳೆಗಾರರ ಸಾಲವನ್ನು ಮನ್ನಾ ಮಾಡುವ ಬಗ್ಗೆ ಸಹಕಾರ ಸಚಿವರ ಗಮನ ಸೆಳೆಯುವುದು.

28. ಶ್ರೀ ಚಿಕ್ಕಣ್ಣ ಅವರು ದಿನಾಂಕ:05.06.2012ರಂದು ಮೀನುಗಾರಿಕೆ ಸಹಕಾರ ಸಂಘದವರಿಂದ ಮೀನುಗಾರರೊಂದಿಗೆ ಘರ್ಷಣೆಯಾಗಿ 3 ಜನ ಮೃತಪಟ್ಟಿರುವ ಬಗ್ಗೆ ಮೀನುಗಾರಿಕೆ ಸಚಿವರ ಗಮನ ಸೆಳೆಯುವುದು.

29. ಶ್ರೀ ಕಿಮ್ಮನೆ ರತ್ನಾಕರ್ ಅವರು ಇಂಧನ ಇಲಾಖೆಯ ಕೆ.ಡಿ.ಸಿಯವರು ನಡೆಸುತ್ತಿರುವ ಮಾಸ್ತಿಕಟ್ಟೆ ಆಂಗ್ಲ ಮತ್ತು ವಿಜ್ಞಾನ ಮಾಧ್ಯಮ ಪ್ರೌಢ ಶಾಲೆಯಲ್ಲಿರುವ ತೊಂದರೆಗಳ ಬಗ್ಗೆ ಇಂಧನ ಸಚಿವರ ಗಮನ ಸೆಳೆಯುವುದು.

30. ಶ್ರೀ ಅಭಯ ಪಾಟೀಲ್ ಅವರು Bus Rapid Transit System (ಬಿ.ಆರ್.ಟಿ.ಎಸ್. ಯೋಜನೆ)ರಡಿ ಯಲಕ್ಕಿ ಬೆಳಗಾವಿಯ ಕಾಕತಿ ಗ್ರಾಮದಿಂದ ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯದ ವರೆಗಿನ ರಸ್ತೆಯನ್ನು ಅಭಿವೃದ್ಧಿಪಡಿಸುವ ಬಗ್ಗೆ ನಗರಾಭಿವೃದ್ಧಿ ಸಚಿವರ ಗಮನ ಸೆಳೆಯುವುದು.

ಮು.ತಿ.ನೋ.,

31. ಶ್ರೀ ಅಮರೇಶ್ ಅವರು ಗ್ರಾಮೀಣ ಪ್ರದೇಶದಲ್ಲಿ ಓದುತ್ತಿರುವ ಶಾಲಾ ಮಕ್ಕಳ ಸಮಸ್ಯೆಗಳ ಬಗ್ಗೆ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರ ಗಮನ ಸೆಳೆಯುವುದು.

32. ಶ್ರೀ ಎನ್. ಎ. ಹ್ಯಾರಿಸ್ ಅವರು ಶಾಂತಿ ನಗರದ ಅಗ್ರಂ ವಾರ್ಡ್‌ನ ಮಾಯಾಬಜಾರ್ ಸ್ಲಂ ನಲ್ಲಿ ವಾಸಿಸುತ್ತಿರುವವರಿಗೆ ಮೂಲಸೌಕರ್ಯಗಳನ್ನು ಒದಗಿಸುವ ಬಗ್ಗೆ ಮುಖ್ಯಮಂತ್ರಿಗಳ ಗಮನ ಸೆಳೆಯುವುದು.

33. ಶ್ರೀ ಅಭಯ ಪಾಟೀಲ್ ಅವರು ಬೆಳಗಾವಿ ಮತಕ್ಷೇತ್ರದ ವ್ಯಾಪ್ತಿಯ ವ್ಯಾಕ್ಸಿನ್ ಡಿಪೋ ಪರಿಸರದಲ್ಲಿ ಹೆರಿಟೇಜಪಾರ್ಕ ಮಾಡುವ ಪ್ರಸ್ತಾವನೆಯನ್ನು ಈಗಾಗಲೇ ಸಲ್ಲಿಸಿದ್ದು ಕಾಮಗಾರಿಯ ಆರಂಭ ಹಾಗೂ ಅನುಷ್ಠಾನಗೊಳಿಸುವ ಬಗ್ಗೆ ತೋಟಗಾರಿಕೆ ಸಚಿವರ ಗಮನ ಸೆಳೆಯುವುದು.

34. ಶ್ರೀ ಅಭಯ ಪಾಟೀಲ್ ಅವರು ಬೆಳಗಾವಿ ದಕ್ಷಿಣ ಮತಕ್ಷೇತ್ರದ ವಡಗಾವಿ ಸರ್ಕಾರಿ ಪ್ರಾಥಮಿಕ ಕೇಂದ್ರವನ್ನು 100 ಹಾಸಿಗೆಗಳ ಆಸ್ಪತ್ರೆಯನ್ನು ಪರಿವರ್ತಿಸುವ ಕಾಮಗಾರಿಯ ಕುರಿತು ಹಾಗೂ ಅಲ್ಲಿರುವ ಎಲ್ಲಾ ಸಿಬ್ಬಂದಿಗಳನ್ನು ಅಲ್ಲಿಯೇ ಮುಂದುವರಿಸುವ ಕ್ರಮವನ್ನು ಕೈಕೊಳ್ಳಲು ವೈದ್ಯಕೀಯ ಶಿಕ್ಷಣ ಸಚಿವರ ಗಮನ ಸೆಳೆಯುವುದು.

35. ಶ್ರೀ ಅಭಯ ಪಾಟೀಲ್ ಅವರು ಬೆಳಗಾವಿ ನಗರದ ಪ್ರವೇಶದ್ವಾರದಲ್ಲಿರುವ ಐತಿಹಾಸಿಕವಾಗಿರುವ ಕಿಲ್ಲೆಯ (ಫೋರ್ಟ) ಸೌಂದರ್ಯೀಕರಣ ಮಾಡುವ ಹಿನ್ನೆಲೆಯಲ್ಲಿ ರಾಜ್ಯ ಸರ್ಕಾರವು ಕೈಕೊಂಡಿರುವ ಕ್ರಮದ ಬಗ್ಗೆ ಪ್ರವಾಸೋದ್ಯಮ ಸಚಿವರ ಗಮನ ಸೆಳೆಯುವುದು.

36. ಶ್ರೀ ಅಭಯ ಪಾಟೀಲ್ ಅವರು ಬೆಳಗಾವಿಯಲ್ಲಿರುವ ಕೇಂದ್ರ ಬಸ್‌ನಿಲ್ದಾಣ ಹಾಗೂ ನಗರ ಬಸ್ ನಿಲ್ದಾಣಗಳನ್ನು ಸೆಟಲೈಟ್ ಬಸ್ ನಿಲ್ದಾಣವನ್ನಾಗಿ ಅಭಿವೃದ್ಧಿಪಡಿಸುವ ಪ್ರಸ್ತಾವನೆಯ ಬಗ್ಗೆ ಉಪ ಮುಖ್ಯಮಂತ್ರಿ (ಗೃಹ ಮತ್ತು ಸಾರಿಗೆ ಸಚಿವರ) ಯವರ ಗಮನ ಸೆಳೆಯುವುದು.

37. ಶ್ರೀ ಅಭಯ ಪಾಟೀಲ್ ಅವರು ಬೆಳಗಾವಿ ವೈದ್ಯಕೀಯ ವಿಜ್ಞಾನ ಸಂಸ್ಥೆಗೆ ಹೊಂದಿಕೊಂಡಿರುವ ಬೆಳಗಾವಿ ಜಿಲ್ಲಾ ಆಸ್ಪತ್ರೆಯನ್ನು ಪ್ರತ್ಯೇಕವಾಗಿಸಿ, ಬೆಳಗಾವಿ ವೈದ್ಯಕೀಯ ವಿಜ್ಞಾನ ಸಂಸ್ಥೆಗೆ 500 ಹಾಸಿಗೆಗಳ ಆಸ್ಪತ್ರೆಯನ್ನಾಗಿ ಪರಿವರ್ತಿಸುವ ಬಗ್ಗೆ ವೈದ್ಯಕೀಯ ಶಿಕ್ಷಣ ಸಚಿವರ ಗಮನ ಸೆಳೆಯುವುದು.

38. ಶ್ರೀ ಅಭಯ ಪಾಟೀಲ್ ಅವರು ಬೆಳಗಾವಿ ವ್ಯಾಕ್ಸಿನ್ ಡಿಪೋ ಪರಿಸರದಲ್ಲಿ ದೆಹಲಿಯಲ್ಲಿರುವ ಅಕ್ಷರಧಾಮದ ಮಾದರಿಯಲ್ಲಿ "ಕೇಶವಧಾಮ" ವನ್ನು ನಿರ್ಮಿಸುವ ಕಾಮಗಾರಿಯ ಆರಂಭ ಹಾಗೂ ಅನುಷ್ಠಾನಗೊಳಿಸುವ ಬಗ್ಗೆ ಕನ್ನಡ ಮತ್ತು ಸಂಸ್ಕೃತಿ ಸಚಿವರ ಗಮನ ಸೆಳೆಯುವುದು.

39. ಶ್ರೀ ಹೆಚ್.ಡಿ. ರೇವಣ್ಣ ಅವರು ರಾಜ್ಯದಲ್ಲಿ ರಾಜೀವ್‌ಗಾಂಧಿ ವಿದ್ಯುತ್ ಯೋಜನೆಯ (RGGVY) 2ನೇ ಹಂತ ಹಾಗೂ ಮೊದಲನೇ ಹಂತದ ಕಾಮಗಾರಿಗಳು ಪೂರ್ಣಗೊಳ್ಳದಿರುವ ಬಗ್ಗೆ ಇಂಧನ ಸಚಿವರ ಗಮನ ಸೆಳೆಯುವುದು.

ಮು.ತಿ.ನೋ.,

40. ಶ್ರೀ ಹೆಚ್.ಡಿ. ರೇವಣ್ಣ ಅವರು ಹಾಸನ ಜಿಲ್ಲೆಯ ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತದವರು ರಸ್ತೆಗಳಲ್ಲಿ ಅಡ್ಡಲಾಗಿರುವ ವಿದ್ಯುತ್ ಕಂಬಗಳನ್ನು ಸ್ಥಳಾಂತರಿಸಲು ಕ್ರಮ ಕೈಗೊಳ್ಳದಿರುವ ವಿಷಯದ ಬಗ್ಗೆ ಇಂಧನ ಸಚಿವರ ಗಮನ ಸೆಳೆಯುವುದು.

41. ಶ್ರೀ ಹೆಚ್.ಡಿ. ರೇವಣ್ಣ ಅವರು ಹಾಸನ ಜಿಲ್ಲೆಯ ರೈತರಿಗೆ ಖಾತೆ ಹಾಗೂ ಕೃಷಿ ಬೆಳೆಯನ್ನು ನಮೂದಿಸಿದ ಗಣಕೀಕರಣದ ಪಹಣಿ ಮತ್ತು ಪಕ್ಕಾ ಪೋಸುಗಳನ್ನು ಒಂದು ವರ್ಷವಾದರೂ ನೀಡದಿರುವುದರಿಂದ ರೈತರಿಗೆ ಉಂಟಾಗಿರುವ ತೊಂದರೆಯ ವಿಷಯದ ಬಗ್ಗೆ ಉಪ ಮುಖ್ಯಮಂತ್ರಿ (ಕಂದಾಯ ಮತ್ತು ಗ್ರಾಮೀಣಾಭಿವೃದ್ಧಿ ಸಚಿವರ) ಯವರ ಗಮನ ಸೆಳೆಯುವುದು.

42. ಶ್ರೀ ಹೆಚ್.ಡಿ. ರೇವಣ್ಣ ಅವರು ಹಾಸನ ಜಿಲ್ಲೆ ಹೊಳೆ ನರಸೀಪುರ ಪಟ್ಟಣದ ಹತ್ತಿರ ಹೇಮಾವತಿ ನದಿಗೆ ಅಡ್ಡಲಾಗಿ ಪ್ರಿಸ್ಟ್ರೆಸ್ಡ್ ಸೇತುವೆ ನಿರ್ಮಿಸುವ ಉದ್ದೇಶಕ್ಕಾಗಿ ದರ ಸಂದಾನವನ್ನು ಮಾಡುವಂತೆ ಹಾಸನ ಜಿಲ್ಲಾಧಿಕಾರಿಗಳಿಗೆ ಆದೇಶಿಸಿದ್ದು ಇದುವರೆವಿಗೂ ಕ್ರಮ ಕೈಗೊಳ್ಳದ ವಿಷಯದ ಬಗ್ಗೆ ಜಲ ಸಂಪನ್ಮೂಲ ಸಚಿವರ ಗಮನ ಸೆಳೆಯುವುದು.

43. ಶ್ರೀ ಹೆಚ್.ಡಿ. ರೇವಣ್ಣ ಅವರು ಕರ್ನಾಟಕ ಹಾಲು ಮಹಾಮಂಡಳಿ ವತಿಯಿಂದ 13 ಹಾಲು ಸರಬರಾಜು ಮಾಡುವ ಒಕ್ಕೂಟಗಳಿಗೆ ಸೇರಿದ ರೂ 250 ಕೋಟಿಗೂ ಹೆಚ್ಚು ಬೆಲೆ ಬಾಳುವ ಹಾಲಿನ ಉತ್ಪನ್ನಗಳು ದಾಸ್ತಾನಿದ್ದು ಹಾಲು ಒಕ್ಕೂಟಗಳು ಕೋಟ್ಯಾಂತರ ರೂಗಳಷ್ಟು ನಷ್ಟವನ್ನು ಅನುಭವಿಸಲು ಕಾರಣಕರ್ತರಾದ ಅಧಿಕಾರಿಗಳ ವಿರುದ್ಧ ಕ್ರಮ ಕೈಗೊಂಡ 160 ಕೋಟಿ ರೂಗಳ ಬಟವಾಡೆ ಪಾವತಿಸದಿರುವ ವಿಷಯದ ಬಗ್ಗೆ ಸಹಕಾರ ಸಚಿವರ ಗಮನ ಸೆಳೆಯುವುದು.

44. ನೆ.ಲ ನರೇಂದ್ರ ಬಾಬು ಅವರು ಭೂಪಸಂದ್ರದಲ್ಲಿ ಕೆ.ಎಂ.ಎಫ್ ಸಂಸ್ಥೆಯ ವಸತಿ ಗೃಹದಲ್ಲಿ ನಡೆಯುತ್ತಿರುವ ಅವ್ಯವಹಾರದ ಬಗ್ಗೆ ಪಶುಸಂಗೋಪನೆ ಸಚಿವರ ಗಮನ ಸೆಳೆಯುವುದು.

45. ಶ್ರೀ ಲಾಲಾಜಿ. ಆರ್. ಮೆಂಡನ್ ಅವರು ಕಾಪು ವಿಧಾನಸಭಾ ಕ್ಷೇತ್ರದ ಹೆಜಮಾಡಿ ಮೀನುಗಾರಿಕಾ ಬಂದರು ನಿರ್ಮಾಣ ಕಾರ್ಯ ವಿಳಂಬವಾಗಿರುವ ಬಗ್ಗೆ ಮುಜರಾಯಿ ಹಾಗೂ ಬಂದರು, ಒಳನಾಡು ಜಲಸಾರಿಗೆ ಸಚಿವರ ಗಮನ ಸೆಳೆಯುವುದು.

46. ಶ್ರೀ ಮಹೇಶ್ ಎಸ್.ಆರ್. ಅವರು ಮೈಸೂರು ರೇಸ್ ಕೋರ್ಸ್ ಮತ್ತು ಗಾಲ್ಫ್ ಕ್ಲಬ್‌ಗಳಿಗೆ ಜಾಗವನ್ನು ಗುತ್ತಿಗೆ ನೀಡಿದ್ದು ಗುತ್ತಿಗೆಯನ್ನು ನವೀಕರಿಸದೇ ಇರುವುದರಿಂದ ಸರ್ಕಾರಕ್ಕೆ ಕೋಟ್ಯಾಂತರ ರೂ ಗಳ ನಷ್ಟ ಉಂಟಾಗಿರುವ ಬಗ್ಗೆ ಲೋಕೋಪಯೋಗಿ ಸಚಿವರ ಗಮನ ಸೆಳೆಯುವುದು.

47. ಶ್ರೀ ಸೈಯದ್ ಯಾಸಿನ್ ಅವರು ಡಾ॥ ಡಿ.ಎಂ. ನಂಜುಂಡಪ್ಪ ಭಾರತೀಯ ತಂತ್ರಜ್ಞಾನ ಸಂಸ್ಥೆಯ ಸ್ಥಾಪನೆಗೆ ವರದಿ ಮಾಡಿರುವ ಶಿಫಾರಸ್ಸನ್ನು ಸರ್ಕಾರ ಒಪ್ಪಿಕೊಳ್ಳದಿರುವ ಬಗ್ಗೆ ಪರಿಸರ ಮತ್ತು ಜೀವಶಾಸ್ತ್ರ ಹಾಗೂ ಯೋಜನೆ ಮತ್ತು ಸಾಂಖ್ಯಿಕ ಸಚಿವರ ಗಮನ ಸೆಳೆಯುವುದು.

ಮು.ತಿ.ನೋ.,

## 5. ಅರ್ಧ ಗಂಟೆ ಕಾಲಾವಧಿ ಚರ್ಚೆ

1. ಶ್ರೀ ಬಿ.ಬಿ ರಾಮಸ್ವಾಮಿಗೌಡ, ಅವರು ಕುಣಿಗಲ್ ತಾಲ್ಲೂಕಿನಲ್ಲಿ ಬಗರ್ ಹುಕುಂ ಸಮಿತಿಯ ಮುಂದಿರುವ ಅರ್ಜಿಗಳ ವಿಲೇವಾರಿ ಬಗ್ಗೆ ದಿನಾಂಕ 24.07.2012ರಂದು ಸದನದಲ್ಲಿ ಉತ್ತರಿಸುವ ಪ್ರಶ್ನೆಗಳ 2ನೇ ಪಟ್ಟಿಯಲ್ಲಿನ ಪ್ರಶ್ನೆ ಸಂಖ್ಯೆ 169(670)ಕ್ಕೆ ಒದಗಿಸಿರುವ ಉತ್ತರಕ್ಕೆ ಸಂಬಂಧಿಸಿದಂತೆ ಅರ್ಧ ಗಂಟೆ ಕಾಲ ಚರ್ಚಿಸುವುದು.

2. ಶ್ರೀ ತನ್ವೀರ ಸೇಠ್, ಅವರು ಲೋಕಾಯುಕ್ತ ವರದಿಯ ಮೇಲೆ ಕೈಗೊಂಡಿರುವ ಕ್ರಮದ ಬಗ್ಗೆ ದಿನಾಂಕ: 24.07.12ರಂದು ಸದನದಲ್ಲಿ ಉತ್ತರಿಸುವ ಪ್ರಶ್ನೆಗಳ 2ನೇ ಪಟ್ಟಿಯಲ್ಲಿನ ಪ್ರಶ್ನೆ ಸಂಖ್ಯೆ: 28 (684)ಕ್ಕೆ ಒದಗಿಸಿರುವ ಉತ್ತರಕ್ಕೆ ಸಂಬಂಧಿಸಿದಂತೆ ಅರ್ಧ ಗಂಟೆ ಕಾಲ ಚರ್ಚಿಸುವುದು.

## 6. ಖಾಸಗಿ ಸದಸ್ಯರ ಕಾರ್ಯಕಲಾಪಗಳು

1. ***ಶ್ರೀ ಎನ್. ಯೋಗೀಶ್ ಭಟ್, ಮಾನ್ಯ ಉಪ ಸಭಾಧ್ಯಕ್ಷರು ಅವರು ಕೆಳಕಂಡ ನಿರ್ಣಯವನ್ನು ಮಂಡಿಸುವುದು.***

"ಪಶ್ಚಿಮ ವಾಹಿನಿ ಯೋಜನೆಯನ್ನು ಸಂಪೂರ್ಣಗೊಳಿಸಲು ದಕ್ಷಿಣ ಕನ್ನಡ, ಉಡುಪಿ ಮತ್ತು ಉತ್ತರ ಕನ್ನಡ ಜಿಲ್ಲೆಗಳಲ್ಲಿ 707 ಕಿಂಡಿ ಅಣೆಕಟ್ಟು ಹಾಗೂ 74 ಉಪ್ಪು ನೀರು ತಡೆ ಕಿಂಡಿ ಅಣೆಕಟ್ಟುಗಳನ್ನು ನಿರ್ಮಾಣ ಮಾಡಿ 8.059 ಟಿ.ಎಂ.ಸಿ. ನೀರನ್ನು ಬಳಸಿಕೊಂಡು ಈ ಭಾಗದ ಜನರಿಗೆ ಶಾಶ್ವತ ಕುಡಿಯುವ ನೀರನ್ನು ಪೂರೈಸುವುದರ ಜೊತೆಗೆ 23269 ಹೆಕ್ಟೇರ್ ಜಮೀನಿಗೆ ನೀರಾವರಿ ಸೌಲಭ್ಯವನ್ನು ಕಲ್ಪಿಸಲು ಸದನವು ಸರ್ಕಾರವನ್ನು ಒತ್ತಾಯಿಸುತ್ತದೆ."

2. ***ಶ್ರೀ ಎನ್. ಯೋಗೀಶ್ ಭಟ್, ಮಾನ್ಯ ಉಪ ಸಭಾಧ್ಯಕ್ಷರು ಅವರು ಕೆಳಕಂಡ ನಿರ್ಣಯವನ್ನು ಮಂಡಿಸುವುದು.***

"ಕರ್ನಾಟಕ ರಾಜ್ಯದ ಸಮಸ್ತ 6 ಕೋಟಿ ಜನತೆಯ ಆರೋಗ್ಯ ಕಾಪಾಡುವಂತಹ ನಿಟ್ಟಿನಲ್ಲಿ (ಆದಾಯ ತೆರಿಗೆ ಪಾವತಿಸುತ್ತಿರುವವರನ್ನು ಹೊರತುಪಡಿಸಿ) ರಾಜ್ಯ ಸರ್ಕಾರ ಆರೋಗ್ಯ ವಿಮಾ ಸೌಲಭ್ಯವನ್ನು ಎಲ್ಲಾ ಜನರಿಗೆ ಒದಗಿಸಲು ಸದನವು ಸರ್ಕಾರವನ್ನು ಒತ್ತಾಯಿಸುತ್ತದೆ."

3. *ಶ್ರೀ ಹೆಚ್.ಡಿ. ರೇವಣ್ಣ ಅವರು ಕೆಳಕಂಡ ನಿರ್ಣಯವನ್ನು ಮಂಡಿಸುವುದು.*

"ರಾಜ್ಯವು ಕಳೆದ 4 ವರ್ಷಗಳಿಂದಲೂ ಸತತ ಬರಗಾಲವನ್ನು ಎದುರಿಸುತ್ತಿದ್ದು ಈ ವರ್ಷವೂ ಭೀಕರ ಬರಗಾಲದಿಂದ ರೈತರು ಸಂಕಷ್ಟಕ್ಕೆ ಸಿಲುಕಿರುವುದರಿಂದ ಅವರ ರಕ್ಷಣೆಗಾಗಿ ರಾಜ್ಯ ಸರ್ಕಾರವು ರೂ. 25,000/- ವರೆಗೆ ರೈತರು ಪಡೆದ ಕೃಷಿ ಸಾಲವನ್ನು ಮನ್ನಾ ಮಾಡುವುದಾಗಿ ಸದನದಲ್ಲಿ ಘೋಷಿಸಲಾಗಿರುತ್ತದೆ. ಆದರೆ ಹೆಚ್ಚಿನ ರೈತರು ರಾಷ್ಟ್ರೀಕೃತ ಬ್ಯಾಂಕುಗಳಲ್ಲಿ ಕೃಷಿ ಸಾಲವನ್ನು ಪಡೆದಿರುವುದರಿಂದ ರೂ. 50,000/- ಗಳ ವರೆವಿಗೆ ರೈತರು ಪಡೆದಿರುವ ಕೃಷಿ ಸಾಲವನ್ನು ಕೇಂದ್ರ ಸರ್ಕಾರ ಮನ್ನಾ ಮಾಡಬೇಕೆಂದು ಹಾಗೂ ಕರ್ನಾಟಕ ರಾಜ್ಯವನ್ನು ಬರಪೀಡಿತ ರಾಜ್ಯವೆಂದು ಘೋಷಿಸುವಂತೆ ರಾಜ್ಯ ಸರ್ಕಾರವು ಕೇಂದ್ರ ಸರ್ಕಾರಕ್ಕೆ ಶಿಫಾರಸ್ಸು ಮಾಡಲು ಸದನವು ಒತ್ತಾಯಿಸುತ್ತದೆ."

**ಪಿ.ಓಂಪ್ರಕಾಶ**
ಕಾರ್ಯದರ್ಶಿ

Raj N

ವಿಧಾನಸಭೆಯ ಕಾರ್ಯಕಲಾಪಗಳ ಪಟ್ಟಿಯನ್ನು ವೆಬ್‌ಸೈಟ್‌ನಲ್ಲಿಯೂ ಸಹ ಪಡೆದುಕೊಳ್ಳಬಹುದು.
(www.kar.nic.in/kla)